# ಕಥೆಗಳನ್ನು ಏಕೆ ಹೇಳಬೇಕು

ಅನುರಾಧಾ ಜೈನ್

ಮಕ್ಕಳಿಗೆ ಕಥೆ ಹೇಳುವುದೆಂದರೆ, ಕೇಳುವುದೆಂದರೆ ತುಂಬಾ ಆಸಕ್ತಿ ಇರುತ್ತದೆ. ಇದೊಂದು ಎಲ್ಲರಿಗೂ ತಿಳಿದಿರುವ ಮತ್ತು ಸರ್ವ ಸಮ್ಮತವಾದ ವಿಷಯವಾಗಿದ್ದು, ಇದು ಮಕ್ಕಳ ಪೋಷಕರು ಮತ್ತು ಮಕ್ಕಳನ್ನು ಶಿಕ್ಷಿತರನ್ನಾಗಿಸಲು ಯತ್ನಿಸುತ್ತಿರುವ ಶಿಕ್ಷಕರಿಗೂ ತಿಳಿದಿರುತ್ತದೆ. ಕಥೆ ಹೇಳುವುದು ಮತ್ತು ಕೇಳುವುದು ಪೋಷಕರ ಮತ್ತು ಶಿಕ್ಷಕರ ಜೀವನದ ಅತ್ಯಂತ ಸಂತೋಷದ ಕ್ಷಣಗಳಾಗಿರುತ್ತವೆ. ಆದರೆ ಈ ಸಂತೋಷಕ್ಕೆ ಕಾರಣವೇನೆಂಬುದನ್ನು ತಿಳಿಯುವ ಅವಶ್ಯಕತೆ ಇದೆ. ಕಥೆಗಳು ನಮ್ಮ ಜೀವನವನ್ನು ತಿಳಿಕೊಳ್ಳಲು ಮತ್ತು ಅದನ್ನು ಆಸ್ವಾದಿಸಲು ಸಹಾಯ ಮಾಡುತ್ತದೆ. ಕಥೆಗಳು ನಮ್ಮ ಮುಂದೆ ಘಟನೆಗಳ ಮತ್ತು ಪಾತ್ರಗಳ ನಡುವಿನ ಸಂಬಂಧದ ವ್ಯವಸ್ಥೆಯನ್ನು ತೆರೆದಿಡುತ್ತದೆ. ಜೊತೆಗೆ ಮನುಷ್ಯನ ಕರ್ಮಗಳ ನೈತಿಕತೆ, ಅರಿವು ಮತ್ತು ಭಾವನಾತ್ಮಕ ಅಂಶಗಳನ್ನು ಏಕಕಾಲಕ್ಕೆ ನಮ್ಮ ಮುಂದೆ ಬಿಚ್ಚಿಡುತ್ತವೆ. ಒಂದು ವೇಳೆ ನಾವು ಕತೆ ಹೇಳುವದರಿಂದ ಯಾವ ಶೈಕ್ಷಣಿಕ ಉದ್ದೇಶ ಪೂರ್ಣವಾಗುತ್ತದೆ ಎಂಬುದನ್ನು ತಿಳಿಯಬಯಸುವುದಾದರೆ, ಆಗ ನಾವು ಕಥೆಗಳ ಈ ಒಂದು ತಿರುಳನ್ನು ತಿಳಿದುಕೊಳ್ಳುವ ಹಾಗೂ ಅದರ ಬಗ್ಗೆ ನಿರಂತರವಾಗಿ ಚರ್ಚಿಸುವ ಅವಶ್ಯಕತೆ ಇದೆ. ಈ ಲೇಖನದಲ್ಲಿ ಅನುರಾಧಾ ಅವರು ತರಗತಿಯಲ್ಲಿ ಕಥೆ ಹೇಳುವ ಮತ್ತು ಅದರ ಮೂಲಕ ಕೆಲವೊಂದು ಚಟುವಟಿಕೆಗಳನ್ನು ಮಾಡುವ ತಮ್ಮ ಅನುಭವಗಳನ್ನು ಬರೆದಿದ್ದಾರೆ. ಈ ಲೇಖನವು ಓದುಗರಿಗೆ ಕಥೆಗಳ ತಿರುಳು ಮತ್ತು ಶಿಕ್ಷಣದ ವಿಸ್ತೃತ ಉದ್ದೇಶಗಳು ಹಾಗು ಇವೆರಡರ ನಡುವಿನ ಗಾಢ ಸಂಬಂಧಗಳ ಬಗ್ಗೆ ಚರ್ಚಿಸಲು ನಮ್ಮನ್ನು ಆಹ್ವಾನಿಸುತ್ತದೆ. ಸಂ.

ಫೌಂಡೇಶನಿನಲ್ಲಿ ಫೆಲೋಶಿಪ್ ಮಾಡುವ ಸಂದರ್ಭದಲ್ಲಿ ನನಗೆ ಸರಕಾರಿ ಶಾಲೆಯ ಪ್ರಾಥಮಿಕ ತರಗತಿಯ ಮಕ್ಕಳ ಜೊತೆಗೆ ಕೆಲಸ ಮಾಡುವ ಅವಕಾಶ ಸಿಕ್ಕಿತು. ಪ್ರಾರಂಭದಲ್ಲಿ ನಾನು ಮಕ್ಕಳೊಂದಿಗೆ ಅದೇಕೆ ಸಮಯ ಕಳೆದೆನೆಂದರೆ, ನನಗೆ ಮಕ್ಕಳ ಬಾಲ್ಯದ ಸುಖ ಕಷ್ಟಗಳನ್ನು ಅರಿಯಬೇಕಿತ್ತು. ಈ ಕೆಲಸವನ್ನು ಹೇಗೆ ಪ್ರಾರಂಭಿಸುವುದು ಎಂದು ತಿಳಿದುಕೊಳ್ಳಲು ನಾನು ಕೆಲವೊಂದು ಪುಸ್ತಕಗಳನ್ನು ತಿರುವಿಹಾಕಿದೆ. ಇದರಲ್ಲಿ 'ಬಚ್ಚೇ ಕಿ ಭಾಷಾ ಔರ್ ಅಧ್ಯಾಪಕ್' ಮತ್ತು 'ದಿವಾಸ್ವಪ್ನ' ಎನ್ನುವ ಎರಡು ಪುಸ್ತಕಗಳು ನನಗೆ ದಾರಿ ತೋರಿಸಿದವು. ಮಕ್ಕಳ ಜೊತೆ ಕೆಲಸ ಮಾಡುತ್ತಲೇ ಕಥೆ ಹೇಳುವ ಬಗ್ಗೆ ಈ ಎರಡೂ ಪುಸ್ತಕಗಳಲ್ಲಿ ಹೆಚ್ಚಿನ ಒತ್ತು ನೀಡಲಾಗಿದೆ. 'ದಿವಾಸ್ವಪ್ನ' ಪುಸ್ತಕವು ಕತೆಗಳನ್ನು ಹೇಳುವ ಬೇರೆ ಬೇರೆ ವಿಧಗಳ ಕುರಿತು ತಿಳಿಸಿಕೊಟ್ಟರೆ, 'ಬಚ್ಚೇ ಕಿ ಭಾಷಾ ಔರ್ ಅಧ್ಯಾಪಕ್' ಪುಸ್ತಕವು ಒಂದು ವಿಮರ್ಶಾತ್ಮಕ ದೃಷ್ಟಿಕೋನವನ್ನು ಒದಗಿಸಿತು.

ಇವೆರಡೂ ಪುಸ್ತಕಗಳು ಕಥೆಗಳನ್ನು ಕೇವಲ ಒಂದು ಪ್ರಕಾರವಾಗಿ ನೋಡದೆ, ಅದನ್ನು ಶಿಕ್ಷಣದ ವಿಧಾನದ ರೂಪದಲ್ಲಿ ನೋಡುವ ದೃಷ್ಟಿಕೋನವನ್ನು ಕೊಟ್ಟಿದೆ. ಕಥೆಗಳನ್ನು ಆಯ್ದುಕೊಂಡು ಕೆಲವೊಂದು ಕಾರ್ಯ ಚಟುವಟಿಕೆಗಳನ್ನು ಮಕ್ಕಳ ಜೊತೆಗೂಡಿ ಮಾಡಿದೆವು. ಅದರಲ್ಲಿ ಸೈದ್ಧಾಂತಿಕವಾಗಿ ಭಾಷೆಯನ್ನು ಕಲಿಯುವುದು, ಅರ್ಜಿಸುವುದು, ವಿಚಾರ ಮತ್ತು ಭಾಷೆಯ ನಡುವಿನ ಸಂಬಂಧ, ಪರಿಕಲ್ಪನೆಗಳ ಸೃಷ್ಟಿ, ಭಾಷೆಯ ಅರ್ಥೈಸುವಿಕೆ ಮತ್ತು ಸಂದರ್ಭಗಳ ಉಪಯುಕ್ತತೆ, ಇವೆಲ್ಲವನ್ನೂ ತಿಳಿದುಕೊಂಡಿದ್ದು, ಕಥೆಗಳ ಮೂಲಕ ಕಾರ್ಯ ಚಟುವಟಿಕೆ ಮಾಡುವ ಸಂದರ್ಭದಲ್ಲಿ ತುಂಬಾ ಸಹಾಯವಾಯಿತು.

**ಕಥೆಗಳನ್ನು ಏಕೆ ಹೇಳಬೇಕು?**

ನಾನು ಸಾಂಗಾನೇರ್ ಸರಕಾರಿ ಶಾಲೆಯ ಮಕ್ಕಳ ಜೊತೆಗೆ ಭಾಷೆಯ ಬಗ್ಗೆ ಕೆಲಸ ಮಾಡಲು ಪ್ರಾರಂಭಿಸಿದಾಗ, ಕಥೆಗಳನ್ನು ಹೇಳುವುದು ತರಗತಿಯ ಪ್ರಕ್ರಿಯೆಯ ಒಂದು ಭಾಗವೇ ಆಗಿತ್ತು. ನಾನು ಒಂದನೆಯ ಮತ್ತು ಎರಡನೆಯ ತರಗತಿಗೆ ಹೋದಾಗೆಲ್ಲ ಮಕ್ಕಳೆಲ್ಲ 'ಚೇ ಚೇ ಚೂಹೆ'ಯ ಕಥೆ ಕೇಳಲು ತುಂಬಾ ಉತ್ಸುಕರಾಗಿರುತ್ತಿದ್ದರು. ಈ ಕಥೆಯ ಸಂಭಾಷಣೆಗಳೆಲ್ಲ ಮಕ್ಕಳಿಗೆ ಬಾಯಿಪಾಠವಾಗಿ ಬಿಟ್ಟಿತ್ತು. ಎಲ್ಲ ಘಟನಾವಳಿಗಳು ಅವರಿಗೆ ನೆನಪಿನಲ್ಲಿರುತ್ತಿತ್ತು. ಹೊಸ ಕಥೆಯನ್ನು ಹೇಳಿದರೂ ಹೇಳದಿದ್ದರೂ ಈ ಕಥೆಯನ್ನು ಮಾತ್ರ ಯಾವಾಗಲೂ ಹೇಳಲೇಬೇಕಿತ್ತು. ಕಥೆಗಳಲ್ಲಿ ಏನೋ ಒಂದು ವಿಧದ ಆಕರ್ಷಣೆ ಇರುತ್ತದೆ. ಕಥೆಗಳೊಂದಿಗೆ ಮಾಡಲಾದ ಪ್ರಯೋಗಗಳ ಬಗ್ಗೆ 'ದಿವಾಸ್ವಪ್ನ'ದಲ್ಲಿ ಹೇಗೆ ಹೇಳಲಾಗಿದೆಯೆಂದರೆ, ಅವು ತರಗತಿಯಲ್ಲಿ ಕಥೆಗಳ ಉಪಯೋಗ ಮತ್ತು ಅದರ ತಿಳುವಳಿಕೆಯನ್ನು ತುಂಬಾ ಚೆನ್ನಾಗಿ ಮಾಡಿಕೊಡುತ್ತವೆ. ಮಕ್ಕಳ ಮನಸ್ಸಲ್ಲಿ ಕಥೆಗಳು ತುಂಬಾ ಬೇಗನೆ ಮನೆಮಾಡಿ ಬಿಡುತ್ತವೆ. ಕಥೆಗಳು ಮನಸ್ಸಿನಲ್ಲಿ ಘಟನೆಗಳ ಛಾಪು ಮೂಡಿಸಿಬಿಡುತ್ತವೆ. ಆದ್ದರಿಂದ ಅವರು ಕಥೆಯಲ್ಲಿನ ಪಾತ್ರವೊಂದು ಯಾವ ಪರಿಸ್ಥಿತಿಯಲ್ಲಿ ಏನು ಹೇಳಿರಬಹುದು ಎನ್ನುವ ಕಲ್ಪನೆಯನ್ನು ಮಾಡಬಲ್ಲವರಾಗುತ್ತಾರೆ. ಇದು ಮಕ್ಕಳಲ್ಲಿ ಭಾಷೆಯ ಸ್ವಭಾವ ಮತ್ತು ಭಾಷೆಯನ್ನು ಕಲಿಯುವ ಸಾಮರ್ಥ್ಯವನ್ನು ಪೋಷಿಸುತ್ತದೆ.

**ಭಾಷೆಯ ತಿಳುವಳಿಕೆ ಮತ್ತು ಕಥೆಗಳ ಉಪಯುಕ್ತತೆ**

ಮಾನವನು ಜೈವಿಕವಾಗಿ ವಿಕಸನಗೊಂಡ ಪ್ರಾಣಿ ಎಂಬ ಸ್ಥಾನಮಾನವನ್ನು ನೀಡುವ ಮೂಲಭೂತ ಕೌಶಲಗಳಲ್ಲಿ ಭಾಷೆಯ ಬಳಕೆಯನ್ನು ಮಾಡಲು ಸಾಧ್ಯವಾಗಿರುವುದು ಕೂಡ ಒಂದಾಗಿದೆ. ಭಾಷೆಯು ಸಮಾಜ ಮತ್ತು ಸಂಸ್ಕೃತಿಯ ಪ್ರತಿಬಿಂಬವಾಗಿದ್ದು, ಅದು ನಮಗೆ ಯಾವುದೇ ಸಮಾಜದ ಒಂದು ಮಿಂಚು ನೋಟವನ್ನು ದರ್ಶಿಸುತ್ತದೆ. ಭಾಷೆಯನ್ನು ಕಲಿಯುವುದು ಒಂದು ಸ್ವಯಂಚಾಲಿತ ಪ್ರಕ್ರಿಯೆಯಾಗಿದ್ದು, ಅದರಲ್ಲಿ ಕಲಿಯುವವನು ಅರಿವಿನ ರೂಪದಲ್ಲಿ ಸಕ್ರಿಯವಾಗಿರುವುದು ಅವಶ್ಯಕ ನಿಬಂಧನೆಯಾಗಿದೆ. ಭಾಷೆ ಜೀವಂತವಾಗಿದ್ದು, ಇದರಲ್ಲಿ ಸನ್ನಿವೇಶಗಳನ್ನು ರಚಿಸಲೂಬಹುದಾಗಿದೆ ಮತ್ತು ಜೋಡಿಸಲೂಬಹುದಾಗಿದೆ.

ಭಾಷೆಯು ಸಾಮಾಜಿಕ ಸಂವಾದಗಳಿಂದ ಅಭಿವ್ಯಕ್ತಗೊಳ್ಳುತ್ತದೆ ಎಂಬುದರಲ್ಲಿ ಯಾವುದೇ ಸಂದೇಹಗಳಿಲ್ಲ. ಮಕ್ಕಳಲ್ಲಿ ಭಾಷೆ ಕಲಿಯುವ ಹಾಗೂ ಗ್ರಹಿಸುವ ಶಕ್ತಿಯು ಸ್ವಾಭಾವಿಕವಾಗಿರುತ್ತದೆ. ನಾವು ನಮ್ಮ ಅನುಭವಗಳಿಗೆ ಅರ್ಥ ಕೊಡುವುದಕ್ಕಾಗಿ ಭಾಷೆಯ ಪ್ರಯೋಗ ಮಾಡುತ್ತೇವೆ. ಯಾವ ವಿಚಾರವನ್ನು ನಾವು ಸೃಷ್ಟಿಸುತ್ತೇವೋ ಅಥವಾ ಯಾವ ಚಿಂತನೆಯು ನಮ್ಮ ಮನಸಿನಲ್ಲಿ ಮೂಡುತ್ತದೋ ಅದಕ್ಕೊಂದು ಆಕಾರ ಕೊಡುವುದಕ್ಕಾಗಿ ನಾವು ಭಾಷೆಯ ಪ್ರಯೋಗ ಮಾಡುತ್ತೇವೆ. ಈ ಪ್ರಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮಾತ್ರ ನಾವು ಕೆಲವೊಂದು ಧ್ವನಿಗಳನ್ನು ಅರಗಿಸಿಕೊಳ್ಳುತ್ತೇವೆ ಮತ್ತು ಆಮೇಲೆ ಅದನ್ನು ರಾಚನಿಕವಾಗಿ ರೂಢಿಗತ ಮಾಡುತ್ತೇವೆ ಹಾಗೂ ಅದೇ ರಚನೆಯಲ್ಲಿ ನಮ್ಮ ಮೆದುಳು ಸಾದೃಶ್ಯತೆ-ಅಸಾದೃಶ್ಯತೆಯನ್ನು ಹುಡುಕುತ್ತದೆ. ಈ ಸಂದರ್ಭದಲ್ಲಿ ಕೆಲವೊಂದು ವಿಶ್ಲೇಷಣೆಯ ಬಳಿಕ ನಾವು ಹೊಸ ಅರ್ಥವನ್ನು ಗ್ರಹಿಸುತ್ತೇವೆ. ಅರ್ಥವನ್ನು ಗ್ರಹಿಸುವ ಈ ಪ್ರಕ್ರಿಯೆಯ ಸನ್ನಿವೇಶವು ಉತ್ಕೃಷ್ಟವಾದಷ್ಟೂ ಅರ್ಥವು ಹೆಚ್ಚು ನಿಖರವಾಗಿರುತ್ತದೆ. ನಿರ್ವಾತದಲ್ಲಿ ಅರ್ಥವನ್ನು ಸೃಷ್ಟಿಸಲಾಗುವುದಿಲ್ಲ, ಹೀಗಾಗಿ ಸಂದರ್ಭವನ್ನು ಸೃಷ್ಟಿಸುವುದು ಅನಿವಾರ್ಯವಾಗಿ ಕಾಣಿಸುತ್ತದೆ.

ಶಾಲೆಗಳಲ್ಲಿ ಅದರಲ್ಲೂ ವಿಶೇಷವಾಗಿ ಪ್ರಾಥಮಿಕ ತರಗತಿಗಳಲ್ಲಿ ಈ ಸನ್ನಿವೇಶಗಳನ್ನು ತುಂಬಾ ಆಸಕ್ತಿದಾಯಕವಾಗಿ ಹೆಣೆಯಲು ಯಾವ ಪ್ರಕ್ರಿಯೆಯನ್ನು ಅನುಸರಿಸುತ್ತೇವೆ ಎನ್ನುವುದು ತುಂಬಾ ಮಹತ್ವದ ಪ್ರಶ್ನೆಯಾಗಿರುತ್ತದೆ. ವಿಶೇಷವಾಗಿ ಅದು ಮಕ್ಕಳ ಭಾಷೆಯ ಕೌಶಲ್ಯದಾಗಿದ್ದರೆ ಈ ಪ್ರಕ್ರಿಯೆಗಳ ಹಾಗು ಚಟುವಟಿಕೆಗಳ ಪ್ರಾಸಂಗಿಕತೆಯು ಹೆಚ್ಚು ಪ್ರಭಾವಿಯಾಗಿರುತ್ತದೆ. ಈ ಕಲ್ಪನೆಗಳಿಗೆ ಒಂದು ರೂಪ ನೀಡಲು ಕಥೆ ಹೇಳುವುದು ಒಂದು ಪರಿಣಾಮಕಾರಿ ವಿಧಾನವಾಗಿ ಗೋಚರಿಸುತ್ತದೆ.

ಕಥೆಗಳನ್ನು ಹೇಳುವುದು ಅಥವಾ ಕೇಳಿಸುವುದು ಕೇವಲ ಒಂದು ಪ್ರಕ್ರಿಯೆ ಅಷ್ಟೇ ಅಲ್ಲ, ಇದು ಭಾಷೆಯೊಂದಿಗೆ ಮಾನವ ಸಂವಹನದ ಒಂದು ಮಾಧ್ಯಮವಾಗಿದೆ. ಇದು ಪ್ರಾಚೀನ ಶಿಕ್ಷಣದ ವಿಧಾನಗಳಲ್ಲಿ ಒಂದಾಗಿದೆ. ಕಥೆಗಳಲ್ಲಿ ಸೃಜನಶೀಲತೆ ಮತ್ತು ಕಲ್ಪನಾಶೀಲತೆಗೆ ಬಹಳಷ್ಟು ಅವಕಾಶಗಳಿರುತ್ತವೆ. ನಮ್ಮ ಕೇಂದ್ರವಾದ, ಪ್ರತಾಪಘಡದ ಅಜೀಮ್ ಪ್ರೇಂಜಿ ಫೌಂಡೇಶನ್ ಗೆ ಬರುವ ಮಕ್ಕಳ ಭಾಷೆಯಲ್ಲಿ ಹೇಳುವುದಾದರೆ ಕಥೆಗಳು ತುಂಬಾ ಮೋಜಿನದಾಗಿರುತ್ತವೆ. ಎಲ್ಲವೂ ಅವರ ಕಣ್ಣು ಮುಂದೆ ನಡೆಯುತ್ತಿರುವ ಹಾಗೆ ಅನಿಸುತ್ತದೆ. ಅದರಲ್ಲಿ ಬರುವ ಕೆಲವು ಕಟುಹಾಸ್ಯಗಳು ಅವರನ್ನು ತುಂಬಾ ನಗಿಸುತ್ತವೆ. ಕಥೆಗಳ ಲೋಕ ಎಷ್ಟು ರೋಚಕ ಮತ್ತು ವಿಸ್ತಾರವಾಗಿರುತ್ತದೆ ಎಂದರೆ ಎಲ್ಲರೂ ಅದರಲ್ಲೇ ತನ್ಮಯರಾಗಿ ಬಿಡುತ್ತಾರೆ. ಈ ಲೋಕದಲ್ಲಿ ಎಲ್ಲರಿಗೂ ಜಾಗವಿದೆ. ಒಂದು ವೇಳೆ ಭಾಷೆಯನ್ನು ಕಲಿಯುವ ಮತ್ತು ಕಲಿಸುವ ದೃಷ್ಟಿಯಿಂದ ನೋಡಲು ಯತ್ನಿಸಿದರೆ ಕಥೆಗಳು ಭಾಷೆಯನ್ನು ಸಮೃದ್ಧಗೊಳಿಸುವ ಕೆಲಸವನ್ನು ಮಾಡುತ್ತವೆ. ಇದರಲ್ಲಿ ಘಟನಾ ಕ್ರಮಗಳು ಎಷ್ಟು ಕುತೂಹಲಕರ ತಿರುವುಗಳನ್ನು ಹೊಂದಿರುತ್ತವೆಂದರೆ ಅವು ನಮ್ಮನ್ನು ಹಿಡಿತದಲ್ಲಿಟ್ಟುಕೊಳ್ಳುತ್ತವೆ.

ರಾಜಸ್ಥಾನದ ಪ್ರತಾಪಗಡದಲ್ಲಿ ಅಜೀಮ್ ಪ್ರೇಂಜಿ ಫೌಂಡೇಶನ್ ಒಂದು 'ಲರ್ನಿಂಗ್ ರಿಸೋರ್ಸ್ ಸೆಂಟರ್' ಆರಂಭಿಸಿತ್ತು. ಅಲ್ಲಿನ ಗ್ರಂಥಾಲಯಕ್ಕೆ ಮಕ್ಕಳೆಲ್ಲ ಬಂದು ಪುಸ್ತಕಗಳನ್ನೆಲ್ಲ ನೋಡಲು, ತಿಳಿದುಕೊಳ್ಳಲು ಹಾಗೂ ಅರ್ಥಮಾಡಿಕೊಳ್ಳಲು ಆರಂಭಿಸಿದ್ದರು. ಪುಸ್ತಕಗಳ ಹೊರನೋಟದಲ್ಲೇ ಪುಸ್ತಕಗಳು ತುಂಬಾ ಮೋಜಿನದ್ದಾಗಿರುತ್ತವೆ ಎಂದು ಅವರಿಗೆ ಅನಿಸಲಾರಂಭಿಸಿತು. ಪುಸ್ತಕಗಳೊಂದಿಗೆ ಒಂದಿಷ್ಟು ಗೆಳೆತನವೂ ಒಡಮೂಡಿತ್ತು. ಅವರಿಗೂ ಇದೊಂದು ಹೊಸ ಅನುಭವವಾಗಿತ್ತು. ಕೇಂದ್ರದಲ್ಲಿ ತುಂಬಾ ಬಣ್ಣ ಬಣ್ಣದ, ಚಿತ್ರಗಳಿಂದ ಕೂಡಿದ, ಏಕಲವ್ಯ, ಸಿಬಿಟಿ, ಎನ್.ಬಿ.ಟಿ, ಎನ್.ಸಿ.ಇ.ಆರ್.ಟಿ ಮುಂತಾದ ಪ್ರಕಾಶನಗಳ ಬಹಳಷ್ಟು ಪುಸ್ತಕಗಳಿದ್ದವು. ಇದರೊಂದಿಗೆ ಎಲ್ಲ ವಯಸ್ಸಿನ ಮಕ್ಕಳು ಭಾಗವಹಿಸುವಂತೆ ಮಾಡಲು ಮತ್ತು ಅವರ ಅಭಿರುಚಿಯು ಬೆಳೆಯುವಂತೆ ಮಾಡಲು ಇನ್ನೇನು ಮಾಡಬಹುದು ಎನ್ನುವ ವಿಚಾರವೂ ನನಗೆ ಬಂದಿತು. ಆಗ ನನಗೆ ಕಥೆಗಳಿಗಿಂತ ಉತ್ತಮವಾದ ಆಯ್ಕೆ ಮತ್ಯಾವುದೂ ಇರಲಾರದು ಎಂದು ಅನಿಸಿತು. ಸಣ್ಣ ಮಕ್ಕಳಿಗೆ ಕಥೆ ಹೇಳಲು ಯೋಚಿಸಿದೆ ಮತ್ತು ದೊಡ್ಡ ಮಕ್ಕಳ ಸಹಾಯದಿಂದ ಕೆಲವು ಜಾನಪದ ಕಥೆಗಳ ಸಂಗ್ರಹ ಮಾಡಲು ಪ್ರಯತ್ನಿಸುವುದು ಹಾಗೂ ಬಳಿಕ ಅವುಗಳನ್ನು ನಾಟಕ ಮಾಡಿ ಪ್ರಯೋಗಿಸಲು ಬಳಸುವುದಾಗಿ ಯೋಚಿಸಿದೆ. ಮಕ್ಕಳ ಜೊತೆಗೆ ಏನೇ ಕೆಲಸ ಮಾಡುವಾಗ ಯಾವುದನ್ನೂ ಮೊದಲೇ ಸಿದ್ದತೆ ಮಾಡಿಕೊಳ್ಳುವುದು ಯಾವಾಗಲೂ ಉಪಯೋಗಕ್ಕೆ ಬರುವುದಿಲ್ಲ. ಮೊದಲನೇ ದಿನ ಮಕ್ಕಳ ಜೊತೆಗೆ ಮಾತನಾಡಿದೆ. ವಿಶೇಷವಾಗಿ ಅವರದೇ ಭಾಷೆಯಲ್ಲಿ ಅವರ ಹಿರಿಯರಿಂದ ಕೇಳಿದ ಯಾವುದೇ ರೀತಿಯ ಕಥೆಗಳಿವೆಯೇ ಎಂದು ಕೇಳಿದೆ. ನಾವು ನಮ್ಮ ಮನೆಯ ಹಿರಿಯರಿಂದ ಇಲ್ಲಿಯವರೆಗೂ ಯಾವುದೇ ರೀತಿಯ ಕಥೆಗಳನ್ನು ಕೇಳಿಲ್ಲ ಎಂದು ಮಕ್ಕಳು ಉತ್ತರಿಸಿದರು. ಇದು ನನಗೆ ಒಂದು ರೀತಿಯಲ್ಲಿ ಅಚ್ಚರಿಯೂ ಆಗಿತ್ತು

ಮತ್ತು ನನ್ನ ಪಾಲಿಗೆ ಸಮಸ್ಯೆಯೂ ಆಗಿ ಪರಿಣಮಿಸಿತು. ಈಗ ಕಥೆಗಳನ್ನು ಸಂಗ್ರಹಿಸುವುದಂತೂ ದೂರದ ಮಾತಾಯಿತು, ಅವರನ್ನು ಕಥೆಗಳ ಜೊತೆ ಜೋಡಿಸುವ ಅವಶ್ಯಕತೆ ಹುಟ್ಟಿಕೊಂಡಿತ್ತು. ಇದೆಲ್ಲವನ್ನೂ ಗಮನದಲ್ಲಿಟ್ಟುಕೊಂಡು ನಾನು 'ಬುಂದೇಲ್ ಖಂಡಿಯ ಕಥೆಗಳಿಂದ' ಪ್ರಾರಂಭ ಮಾಡಿದೆ. ಮೊದಲನೇ ದಿನ ನಾನು ಮಕ್ಕಳಿಗೆ 'ಮಿಜ್‌ಬಾನ್' ಕಥೆಯನ್ನು ಹೇಳಿದೆ ಮತ್ತು ನಿಮಗೆ ಕಥೆಗಳೇಕೆ ಇಷ್ಟವಾಗುತ್ತದೆ ಎಂದು ಬರೆಯುವಂತೆ ದೊಡ್ಡ ಮಕ್ಕಳಿಗೆ ಹೇಳಿದೆ. ಕಥೆಗಳು ನಮಗೆ ತುಂಬಾ ವಿನೋದಮಯ ಅನ್ನಿಸುತ್ತವೆ, ಅದರಲ್ಲಿ ಹಾಸ್ಯದ ವಾಕ್ಯಗಳಿರುತ್ತವೆ, ನಾವು ಕಥೆಗಳನ್ನು ಓದುವಾಗಲೆಲ್ಲಾ ಅವು ನಮ್ಮ ಕಣ್ಣ ಮುಂದೆಯೇ ಎಲ್ಲ ಸಂಗತಿಗಳು ನಡೆಯುತ್ತಿವೆ ಎಂದು ಅನಿಸುತ್ತದೆ ಎಂದು ಮಕ್ಕಳು ಬರೆದರು.

ಹೀಗೆ ಇದೇ ಪದ್ಧತಿಯಲ್ಲಿ ಮುಂದುವರಿಯುತ್ತಾ ನಾನು 'ಲಲ್ಲೂ ಚೋರ್' ನ ಎಂಬ ಕಥೆ ಹೇಳಿದೆ ಮತ್ತು 'ಈ ಕಥೆಯನ್ನು ನೀವು ನಿಮ್ಮದೇ ಭಾಷೆಯಲ್ಲಿ ಬರೆಯಲು ಪ್ರಯತ್ನಿಸಬಹುದೇ?' ಎಂದು ಮಕ್ಕಳ ಮುಂದೆ ಸವಾಲನ್ನು ಇಟ್ಟೆ. ಪಿಯೂಷ್ ಎಂಬ ಹುಡುಗ ಕಥೆಯನ್ನು ಮಾಲವಿ ಭಾಷೆಯಲ್ಲಿ ಬರೆದ. ಬುಂದೇಲಿ ಪದಗಳನ್ನು ಮಾಲವಿ ಭಾಷೆಯಲ್ಲಿ ಬದಲಾವಣೆ ಮಾಡಿ ಕಥೆಯನ್ನು ಹೆಣೆದಿದ್ದ. ಕಥೆಗಳನ್ನು ಹೇಳುತ್ತಲೇ ಕೇಂದ್ರದ ಕೆಲವೊಂದು ಪ್ರಕ್ರಿಯೆಗಳನ್ನು ಸಹ ನಿಗದಿತಗೊಳಿಸಲಾಯಿತು ಮತ್ತು ಇದರಲ್ಲಿ ಮಕ್ಕಳೂ ಸಹ ಭಾಗವಹಿಸಿದರು. ಚಿಕ್ಕ ಮಕ್ಕಳಿಗೆ ಪುಸ್ತಕದಲ್ಲಿನ ಕಥೆಗಳನ್ನು ಓದಿ ಹೇಳುವ ಜವಾಬ್ದಾರಿಯನ್ನು ದೊಡ್ಡ ಮಕ್ಕಳು ವಹಿಸಿದರು. ಕೇಂದ್ರದಲ್ಲಿ ತಾವೇ ಶಾಂತಿಯನ್ನು ಕಾಪಾಡುವುದಾಗಿಯೂ ಯಾರಾದರೂ ಗದ್ದಲ ಮಾಡಿದರೆ ಅವರನ್ನು ದ಼ೂರವಿಡುವುದಾಗಿಯೂ ಮಕ್ಕಳೆಲ್ಲ ಸೇರಿ ನಿರ್ಣಯವನ್ನು ತೆಗೆದುಕೊಂಡರು. ಇದೇ ಪ್ರಕಾರದಲ್ಲಿ 'ಮಿಂದೋ ಮಿಂದರಿಯಾ'ನ ಬುಂದೇಲಿ ಕಥೆ ಹೇಳಿದ ನಂತರ, ನೀವೂ ಮಾಲವಿಯಲ್ಲಿ ಯಾವುದಾದರೂ ಕಥೆಯನ್ನು ಹೇಳಿ ಎಂದು ನಾನು ಮಕ್ಕಳಿಗೆ ಹೇಳಿದೆ. ಒಬ್ಬ ಹುಡುಗ ಒಂದು ಹಿಂದಿ ಕಥೆಯನ್ನು ಮಾಲವಿಯಲ್ಲಿ ರೂಪಾಂತರಿಸಿ ಹೇಳಿದ. ಒಂದು ಭಾಷೆಯಿಂದ ಇನ್ನೊಂದು ಭಾಷೆಯೆಡೆಗಿನ ಯಾನವನ್ನು ನಡೆಸಲು ಕಥೆಗಳ ಕಾರಣದಿಂದಲೇ ಸಾಧ್ಯವಾಯಿತು. ಕಥೆಗಳ ಸಹಾಯದಿಂದ ಯಾವೆಲ್ಲ ಘಟನೆಗಳು ಘಟಿಸಿದವೋ ಅವೆಲ್ಲವೂ ಭಾಷೆಯ ಸ್ಥಾನವನ್ನು ತನ್ನಿಂದ ತಾವೇ ರೂಪಿಸಿದವು.

## 1. ಪ್ರಾಥಮಿಕ ತರಗತಿಗಳಲ್ಲಿ ಕಥೆಗಳು ಒಂದು ಸಹಜ ಅಭಿವ್ಯಕ್ತಿಯ ಕೊಂಡಿ

ಮಕ್ಕಳು ಯಾವಾಗ ಶಾಲೆಯಲ್ಲಿ ಪ್ರಾಥಮಿಕ ತರಗತಿಗಳಿಗೆ ಬರಲಾರಂಭಿಸುತ್ತಾರೋ ಆಗ ಶಾಲೆಯ ವಾತಾವರಣವು ಅವರುಗಳ ಸಹಜ ಸ್ವಭಾವಕ್ಕೆ ವ್ಯತಿರಿಕ್ತವಾಗಿರುತ್ತದೆ. ಮಕ್ಕಳು ಸ್ವಭಾವತಃ ತಮಗನಿಸಿದ್ದನ್ನು ಸಹಜವಾಗಿಯೇ ಅಭಿವ್ಯಕ್ತಿಸುತ್ತಾರೆ. ಆದರೆ ಶಾಲೆಯ ಔಪಚಾರಿಕ ವಾತಾವರಣದಿಂದಾಗಿ ಈ ಅವಕಾಶವು ಕಡಿಮೆಯಾಗುತ್ತದೆ. ಶಾಲೆಯು ಒಂದು ಶಿಕ್ಷಣ ಸಂಸ್ಥೆಯಾಗಿರುವುದರಿಂದ ಅದಕ್ಕೆ ತನ್ನದೇ ಆದ ಕೆಲವೊಂದು ಇತಿಮಿತಿಗಳಿರುತ್ತವೆ. ಇಂತಹ ಪರಿಸ್ಥಿತಿಯಲ್ಲಿ ಶಿಕ್ಷಕರಿಗೆ ಕೆಲವೊಂದು ಪ್ರಕ್ರಿಯೆಗಳನ್ನು ನಿರ್ಧರಿಸಿ, ಅವುಗಳ ಮೂಲಕ ಅವರು ಶೈಕ್ಷಣಿಕ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ತರಗತಿಗಳಲ್ಲಿ ಭಾಷೆಯ ಕೌಶಲ್ಯಗಳ ಬಗ್ಗೆ ಕೆಲಸ ಮಾಡಬೇಕಾಗುತ್ತದೆ. ಕಥೆಗಳನ್ನು ಬಳಸಿಕೊಂಡು ಭಾಷೆಯ ಕೌಶಲ್ಯಗಳ ಬಗ್ಗೆ ಕೆಲಸ ಮಾಡುವುದು ಕೂಡ ಒಂದು ಸುಲಭದ ಮಾಧ್ಯಮವಾಗಿರುತ್ತದೆ. ಕಥೆಗಳಲ್ಲಿ ಹೇಳಲಾಗುವ ಸಂಭಾಷಣೆಗಳು ಮಕ್ಕಳಿಗೆ ಸಂಪೂರ್ಣ ಸನ್ನಿವೇಶವನ್ನು ಕಟ್ಟಿಕೊಡುವುದರಿಂದ ಅವುಗಳ ಮೂಲಕ ಎಲ್ಲವೂ ಅರ್ಥವಾಗುತ್ತದೆ. ಹೇಳಿರುವ

ಯಾವುದಾದರೂ ಕಥೆಯನ್ನು ಮಕ್ಕಳು ಸ್ವತಃ ತಮ್ಮದೇ ಭಾಷೆಯಲ್ಲಿ ಅದರ ಅರ್ಥ ಮತ್ತು ಮೂಲ ಘಟನೆಗಳನ್ನು ಬದಲಿಸದೆಯೇ ಹೇಳಬಲ್ಲರು ಎನ್ನುವ ವಿಷಯವೇ ತುಂಬಾ ಕುತೂಹಲಕರವಾಗಿದೆ.

**ತರಗತಿಗಳಲ್ಲಿ ಕಥೆಗಳು**

ಎರಡನೇ ತರಗತಿಯ ಮಕ್ಕಳಿಗೆ ನಾನು 'ಸೋನಾ ಮೌಸಿ', 'ಏಕ್ ಬಿಲ್ಲಿ ಕೀ ಕಹಾನಿ' ಕಥೆಯನ್ನು ಹೇಳಿದೆ. ಅದರಲ್ಲಿ ಕೋತಿ, ಮೊಲ, ಆಮೆ, ಮತ್ತು ಬೆಕ್ಕು ಅಂದರೆ ಸೋನಾ ಮೌಸಿ ಇದ್ದರು. ಮಕ್ಕಳಿಗೆ ಕಥೆ ಹೇಳಿದ ನಂತರ "ಈ ಕಥೆಯನ್ನು ನಾವು ನಾಟಕ ರೂಪದಲ್ಲಿ ಪ್ರದರ್ಶಿಸಬಹುದೇ?" ಎಂದು ನಾನು ಕೇಳಿದ್ದೆನಷ್ಟೇ. ಮಾರನೆಯ ದಿನ ಮಕ್ಕಳು ಪೂರ್ಣ ತಯಾರಿಯೊಂದಿಗೇ ಶಾಲೆಗೆ ಬಂದರು. ಅವರ ಬಳಿ ಸೋನಾ ಮೌಸಿಯ ಸೀರೆಯೂ ಸಿದ್ಧವಾಗಿತ್ತು. ಯಾವ ಪಾತ್ರಗಳನ್ನು ಯಾರು ಮಾಡುವುದೆಂದು ಅವರೆಲ್ಲರೂ ಅವರವರೇ ನಿರ್ಣಯಿಸಿದ್ದರಲ್ಲದೆ, ಕಥೆಯನ್ನು ನಾಟಕ ರೂಪದಲ್ಲಿ ಪ್ರದರ್ಶಿಸಲು ಎಲ್ಲ ತಯಾರಿ ನಡೆಸಿದ್ದರು. ಪಾತ್ರಗಳ ಸಂಭಾಷಣೆಯಿಂದ ಹಿಡಿದು ಹಾವ-ಭಾವ ಹೇಗಿರಬೇಕು ಎನ್ನುವುದರವರೆಗೂ ಎಲ್ಲವನ್ನೂ ಮಕ್ಕಳೇ ಸ್ವತಃ ತಾವೇ ಯೋಜಿಸಿಕೊಂಡಿದ್ದರು. ಕಥೆಯಲ್ಲಿ ಪಾತ್ರಧಾರಿಗಳಾಗಿರದ ಮಕ್ಕಳು ನಾಟಕದ ಸಂಭಾಷಣೆ ಹೇಳುವಾಗ ಮಕ್ಕಳಿಗೆ ಸಹಾಯ ಮಾಡಿದರು. ಕೇಳಿದ ಕಥೆಗೆ ಪಾತ್ರಗಳ ಸಂಭಾಷಣೆ, ಪಾತ್ರಗಳ ವೇಷಭೂಷಣಗಳ ಆಯ್ಕೆ ಇವೆಲ್ಲವನ್ನೂ ಮಕ್ಕಳು ತಾವೇ ಸ್ವತಃ ಮಾಡಿದರು. ಇಲ್ಲಿ ಕಥೆಯನ್ನು ತಮ್ಮ ಮುಕ್ತ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಲು ಸಹಾಯಕವಾಗುವಂತೆ ಒಂದು ಮಾಧ್ಯಮವಾಗಿ ಉಪಯೋಗಿಸಲಾಗಿದೆ. ಈವೊಂದು ಪ್ರಕ್ರಿಯೆಯಲ್ಲಿ ಮಕ್ಕಳು ತಾವು ಕೇಳಿರುವ ಕಥೆಯ ಅರ್ಥವನ್ನು ಗ್ರಹಿಸಿಕೊಂಡು ಅದನ್ನು ತಮ್ಮದೇ ಮಾತುಗಳಲ್ಲಿ ನಿರೂಪಿಸಿದರು. ಮಕ್ಕಳಿಂದ ಈ ರೀತಿಯ ಭಾಷೆಯನ್ನು ಪ್ರಯೋಗಿಸುವುದು ಒಂದು ರೀತಿಯಲ್ಲಿ ಆಶ್ಚರ್ಯಕರ ಸಂಗತಿಯಾಗಿತ್ತು.

ಮಕ್ಕಳಲ್ಲಿ ಭಾಷೆಯನ್ನು ಕಲಿಯುವ, ಅರ್ಜಿಸಿಕೊಳ್ಳುವ ಸಾಮರ್ಥ್ಯವು ಜನ್ಮಜಾತವಾಗಿ ಬಂದಿರುತ್ತದೆ ಎಂದು ನೋಮ್ ಚೋಮಸ್ಕಿ ವಾದಿಸಿದ್ದರು. ಮಕ್ಕಳ ಮೆದುಳಿನಲ್ಲಿ ಭಾಷೆಯನ್ನು ಅರ್ಜಿಸಿಕೊಳ್ಳುವ ಸಾಧನವಿರುತ್ತದೆ. ಅವರ ಮೆದುಳಿನಲ್ಲಿ ವ್ಯಾಕರಣದ ಕಠಿಣ ಸಂರಚನೆಗಳ ಒಂದು ಅಚ್ಚು ಮೊದಲೇ ಅಡಕವಾಗಿರುತ್ತದೆ. ಆದ್ದರಿಂದ ಮಕ್ಕಳು ಮೂರು ವರ್ಷ ವಯಸ್ಸಿನಿಂದಲೇ ಭಾಷೆಯ ಕಠಿಣ ಸಂರಚನೆಗಳನ್ನು ತಿಳಿದುಕೊಳ್ಳುತ್ತಾರೆ ಹಾಗೂ ಅದನ್ನು ತಮ್ಮ ಸಂಭಾಷಣೆಯಲ್ಲಿ ಪ್ರಯೋಗಿಸುತ್ತಾರೆ. ತರಗತಿಯಲ್ಲಿ ಮಕ್ಕಳ ಅಭಿವ್ಯಕ್ತಿಗೆ ಅವಕಾಶವನ್ನು ನೀಡುವ ಮೂಲಕ ಬಹಳಷ್ಟು ಮಟ್ಟಿಗೆ ಪರಿಕಲ್ಪನೆಗಳನ್ನು ಅಭಿವೃದ್ಧಿಪಡಿಸಬಹುದು. ಇದರಲ್ಲಿ ಅವರ ಹಿಂದಿನ ಅನುಭವಗಳೂ ಕೂಡ ಅವರ ತಿಳುವಳಿಕೆಯ ವಿಸ್ತರಿಸಲು ನೆರವಾಗುತ್ತದೆ. ಕಥೆಗಳನ್ನು ಹೇಳುವುದರಿಂದ ಭಾಷೆಯ ಜೊತೆಗೆ ಅವರ ಬಾಂಧವ್ಯ ಏರ್ಪಡುತ್ತದೆ. ಮಕ್ಕಳು ತುಂಬಾ ಸಹನೆಯಿಂದ ಕಥೆಯನ್ನು ಕೇಳುತ್ತಾರಲ್ಲದೆ, ಹುರುಪಿನಿಂದ ಮತ್ತು ಸಹಜವಾಗಿ ಅನೇಕ ಹೊಸ-ಹೊಸ ಪದಗಳನ್ನು ಪರಿಚಯಿಸಿಕೊಳ್ಳುತ್ತಾರೆ. ಕಥೆಯು ಮಕ್ಕಳಿಗೆ ಆಸಕ್ತಿದಾಯಕ ಸಂದರ್ಭಗಳನ್ನು ಸೃಷ್ಟಿಸುವ ಮೂಲಕ ಮುಂದೆ ಓದುವ-ಬರೆಯುವ ಅಮೂರ್ತ ಪರಿಕಲ್ಪನೆಗಳನ್ನು ಕಲಿಯಲು ಸಹಾಯ ಮಾಡುತ್ತದೆ. ಕಥೆಗಳಲ್ಲಿ ಪದಗಳ ಧ್ವನಿ ರಚನೆ ಮತ್ತು ಲಿಖಿತ ರಚನೆಯ ಮಧ್ಯೆ ಸಂಬಂಧವೇರ್ಪಡುವಂತೆ ಮಾಡುತ್ತದೆ. ಜೊತೆ ಜೊತೆಗೆ ಮಕ್ಕಳು ಚಿಂತನೆ

ಪ್ರಕ್ರಿಯೆಯಲ್ಲೂ ತೊಡಗಿಸಿಕೊಳ್ಳುತ್ತಾರೆ. ಆದ್ದರಿಂದ ಮೂಲಭೂತವಾಗಿ ಕೆಲವು ಭಾಷೆಗಳನ್ನು ರೂಪಿಸಲು ಸಾಧ್ಯವಾಗಿದೆ. ಈ ಪ್ರಕ್ರಿಯೆಯಲ್ಲಿ ಭಾಷೆಯಲ್ಲಿ ಅಂತರ್ಗತವಾಗಿರುವ ಅರ್ಥವು ಬದಲಾಗುವುದಿಲ್ಲ.

**ಸಾಂಗಾನೇರ್ ನ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯ ಎರಡನೇ ತರಗತಿಯಲ್ಲಿನ ಅನುಭವ**

**ಆಲೋಚನೆಗಳ ಪ್ರಕ್ರಿಯೆಯಲ್ಲಿ ಕಥೆಗಳ ಬಳಕೆ**

ಮನಸ್ಸಿನಲ್ಲಿ ಮೂಡುವ ಆಲೋಚನೆಗಳು ಹಾಗು ಅಮೂರ್ತ ಆಲೋಚನೆಗಳು, ಭಾಷೆಯ ಸಂಯೋಜನೆಯಲ್ಲೇ ಹೆಣೆದುಕೊಂಡಿದೆ. ಈ ಆಲೋಚನೆಗಳ ನಡುವೆ ಪರಸ್ಪರ ಸಂಬಂಧ ಇರುತ್ತದೆ. ಕಥೆಗಳಲ್ಲಿ ಘಟನೆಗಳ ಮತ್ತು ವಿಚಾರಗಳ ಮಧ್ಯೆ ಯಾವ ಹೊಂದಾಣಿಕೆ ಇರುತ್ತದೆಯೋ ಅದು ಸಂಕೀರ್ಣವಾದ ಅಮೂರ್ತ ಚಿಂತನೆಗೆ ಅವಕಾಶ ಮಾಡಿಕೊಡುತ್ತದೆ. ಕಥೆಗಳಲ್ಲಿ ಚಿಂತನೆ, ತರ್ಕ ಹಾಗು ಕಲ್ಪನೆಗೆ ಅವಕಾಶವನ್ನು ಒದಗಿಸಿಕೊಡಬಹುದಾಗಿದೆ.

ಹಿರಿಯ ಪ್ರಾಥಮಿಕ ಶಾಲೆಯ ಏಳನೇ ತರಗತಿಯ ಮಕ್ಕಳಿಗೆ ಜಯಶಂಕರ ಪ್ರಸಾದರ 'ಛೋಟಾ ಜಾದೂಗಾರ್' ಕಥೆಯನ್ನು ನಾನು ಹೇಳಿಕೊಡುತ್ತಿದ್ದೆ. ಈ ಕಥೆ ಅವರ ಪಠ್ಯಪುಸ್ತಕದಲ್ಲೂ ಇತ್ತು. ಕಥೆ ಹೇಳಿ ಮುಗಿದ ಮೇಲೆ ಮಕ್ಕಳಿಗೆ, 'ಛೋಟಾ ಜಾದೂಗಾರನ ಜೀವನದಲ್ಲಿ ಮುಂದೇನಾಗಿರಬಹುದು?' ಎಂಬ ಪ್ರಶ್ನೆ ಕೇಳಿದೆ. ಮೊದಮೊದಲು ಮಕ್ಕಳು ಸ್ವಲ್ಪ ಗೊಂದಲಕ್ಕೆ ಒಳಗಾದರು. ಆದರೆ ಅವರೇ 'ಒಂದು ಸಲ ಕಥೆಯನ್ನು ಓದೋಣ, ಆಮೇಲೆ ಏನಾಯಿತು ಎಂದು ಯೋಚಿಸೋಣ' ಎಂದು ನಿರ್ಣಯಿಸಿದರು. ಮಕ್ಕಳು ಕಥೆಯಲ್ಲಿರುವ 'ಛೋಟಾ ಜಾದೂಗಾರ'ನ ಬಗ್ಗೆ ಕೊಟ್ಟಿರುವ ಕೆಲವೊಂದು ಮಾಹಿತಿಗಳನ್ನು ಬರೆದರು, ಆಮೇಲೆ ತನ್ನ ಅಮ್ಮ ತೀರಿಕೊಂಡ ಮೇಲೆ ಛೋಟಾ ಜಾದೂಗಾರನು ಏನು ಮಾಡುತ್ತಿರಬಹುದು ಎಂದು ಊಹಿಸಿದರು.

ಕಥೆಗಳ ಮೇಲೆ ಮಾಡಿರುವ ಕೆಲಸದಿಂದ ಬಂದಂತಹ ಈ ಅಂಶವು, ತರ್ಕಬದ್ಧತೆಯನ್ನು ಗಮನದಲ್ಲಿ ಇಟ್ಟುಕೊಂಡು ಚಿಂತನೆಯನ್ನು ಪ್ರೇರೇಪಿಸುವಂತೆ ಗೋಚರಿಸುತ್ತದೆ. ತರಗತಿಗಳಲ್ಲಿ ಮೌಲಿಕವಾದ ಚಿಂತನೆ ಮತ್ತು ಕಲ್ಪನೆಯನ್ನು ವರ್ಧಿಸಲು ಕಥೆಗಳನ್ನು ಬಳಸಬಹುದಾಗಿದೆ. ಯಾವ ಪ್ರಕಾರದ ವ್ಯಕ್ತಿತ್ವದ ಜೀವನದಲ್ಲಿ ಏನೇನಾಗಬಹುದು ಎಂಬುದನ್ನು ಯೋಚಿಸುವುದು, ಮಕ್ಕಳು ಯಾವ ರೀತಿಯಲ್ಲಿ ಆಲೋಚನೆ ಮಾಡುತ್ತಿದ್ದಾರೆ ಎನ್ನುವುದನ್ನು ಸೂಚಿಸುತ್ತದೆ. ಅವರ ಮನಸ್ಸಿನಲ್ಲಿ ಯಾವ ರೀತಿಯ ವಿಚಾರ ಮೂಡುತ್ತಿದೆ? ಈ ವಿಚಾರಗಳ ನಡುವಿನ ಸಂಬಂಧವೇನು? ಇಂತಹ ಅವಕಾಶಗಳು ಕೇವಲ ಕಥೆಗಳ ಪ್ರಶ್ನೆಗಳಿಗೆ ಬಾಯಿಪಾಠ ಮಾಡಿ ಉತ್ತರ ಬರೆಯುವ ಪ್ರವೃತ್ತಿಯಿಂದ ಹೊರಬಂದು ಸ್ವತಃ ತಾವೇ ಚಿಂತನೆ ಮಾಡಿ ಬರೆಯುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಲು ಸಹಕಾರಿಯಾಗುತ್ತದೆ. ಇದು ಮಕ್ಕಳಲ್ಲಿ ವಿವೇಚನೆ, ಚಿಂತನೆ ಮತ್ತು ಕಲ್ಪನೆಯನ್ನು ಉತ್ತೇಜಿಸುತ್ತದೆ. ಏಳನೇ ತರಗತಿಯ ವಿದ್ಯಾರ್ಥಿನಿಯರು 'ಛೋಟಾ ಜಾದೂಗರ್' ಕಥೆಯನ್ನು ಮುಂದುವರಿಸಿದ ರೀತಿಯಲ್ಲೇ ಆರನೇ ತರಗತಿಯ ಹುಡುಗಿ ಪ್ರಿಯಾಂಕಾ ಕೂಡ 'ಮನೋಹರನ ಕಥೆ'ಯನ್ನು ತರ್ಕಬದ್ಧವಾಗಿ ಮುಂದುವರಿಸಿದಳು.

**ಜಾದೂ ಮಾಡುವ ಮೈದಾನದ ಮಾಲೀಕ 'ಛೋಟಾ ಜಾದೂಗಾರ್'**

'ಛೋಟಾ ಜಾದೂಗಾರ್' ಮರಳಿ ಅದೇ ಮೈದಾನದಲ್ಲಿ ಜಾದು ಮಾಡುವುದನ್ನು ಆರಂಭಿಸಿದ. ಕ್ರಮೇಣ ಅವನ ಜಾದುವಿನ ಆಕರ್ಷಣೆಯಿಂದ ಹೆಚ್ಚು ಹೆಚ್ಚು ಜನರು ಬರಲು ಪ್ರಾರಂಭಿಸಿದರು. ಛೋಟಾ ಜಾದೂಗಾರ ಬಹಳ ಕಷ್ಟಪಟ್ಟು ದುಡಿದ. ನಿಧಾನವಾಗಿ ಅವನೇ ತಾನು ಜಾದು ಮಾಡುತ್ತಿದ್ದ ಮೈದಾನವನ್ನು ಖರೀದಿಸಿದ. ಕೆಲ ದಿನಗಳ ನಂತರ ಆತನ ತಂದೆ ಕೂಡ ಜೈಲಿನಿಂದ ಹೊರಬಂದು ಛೋಟಾ ಜಾದೂಗಾರನಿಗೆ ಸಹಾಯ ಮಾಡಲಾರಂಭಿಸಿದ. ಆನಂತರ ಛೋಟಾ ಜಾದೂಗಾರ ಮನೆಯನ್ನು ಕಟ್ಟಿಸಿದ. ಮುಂದೆ ಮದುವೆ ಮಾಡಿಕೊಂಡು ಖುಷಿ ಖುಷಿಯಾಗಿ ತನ್ನ ಕುಟುಂಬದ ಜೊತೆಗೆ ಜೀವನ ಸಾಗಿಸಲಾರಂಭಿಸಿದ. ಕಥೆಯನ್ನು ಮುಂದುವರಿಸುವ ಸಂದರ್ಭದಲ್ಲಿ, ಛೋಟಾ ಜಾದೂಗಾರ ಪ್ರಾಮಾಣಿಕನಾಗಿದ್ದ ಮತ್ತು ಕಷ್ಟಪಟ್ಟು ದುಡಿಯುವ ಹುಡುಗನಾಗಿದ್ದ, ಹೀಗಾಗಿ ಅವನಿಗೆ ಒಳ್ಳೆಯದೇ ಆಗಬೇಕು ಎಂದು ಮಕ್ಕಳು ಬಯಸಿದರು. ಅವನ ಇಂದ್ರಜಾಲದ ಕೈಚಳಕಗಳು ತುಂಬಾ ವಿಶಿಷ್ಟವೂ ಮತ್ತು ಮನೋರಂಜನಾತ್ಮಕವೂ ಆಗಿದ್ದವು. ಮಕ್ಕಳು ಇವೆಲ್ಲವುಗಳನ್ನೂ ಗಮನದಲ್ಲಿಟ್ಟುಕೊಂಡು ಛೋಟಾ ಜಾದೂಗಾರನ ಭವಿಷ್ಯದ ಜೀವನವನ್ನು ಕಲ್ಪಿಸಿಕೊಂಡರು. ಅವರ ಚಿಂತನೆಯು, ಛೋಟಾ ಜಾದೂಗಾರನು ಕಷ್ಟಪಟ್ಟು ದುಡಿಯುವ ಹಾಗು ಪ್ರಾಮಾಣಿಕ ಹುಡುಗ ಎನ್ನುವ ತರ್ಕವನ್ನು ಆಧರಿಸಿತ್ತು. ಆದ್ದರಿಂದ ಅವನಿಗೆ ಅವನ ಜೀವನದಲ್ಲಿ ಯಶಸ್ಸು ಸಿಗಬೇಕು. ಛೋಟಾ ಜಾದೂಗಾರನು ಯಾವ ಮೈದಾನದಲ್ಲಿ ಜಾದು ಮಾಡುತ್ತಿದ್ದನೋ ಅದನ್ನೇ ಖರೀದಿಸುವುದು, ಆತನ ಯಶಸ್ಸನ್ನು ಇನ್ನೂ ಸ್ಪಷ್ಟವಾಗಿ ಪ್ರದರ್ಶಿಸುತ್ತಿತ್ತು.

**ರಾಜಕೀಯ ಬಾಲಕಿಯರ ಹಿರಿಯ ಪ್ರಾಥಮಿಕ ಶಾಲೆ, ಸಂಗಾನೇರ್ ಓಲ್ಡ್, ಜೈಪುರದ ಏಳನೇ ತರಗತಿಯ ಅನುಭವ.**

**೧) ಭಾಷೆಯ ಕೌಶಲ್ಯದ ಬೆಳವಣಿಗೆಯಲ್ಲಿ ಕಥೆಗಳ ಪಾತ್ರ**

ಯಾವಾಗ ಭಾಷೆಯನ್ನೂ ನಾವು ಕೌಶಲ್ಯದ ರೂಪದಲ್ಲಿ ನೋಡುತ್ತೇವೆಯೋ ಆಗ ಅದನ್ನು ಲಿಖಿತ ಮತ್ತು ಮೌಖಿಕ ಎನ್ನುವ ವ್ಯಾಪ್ತಿಗಳಲ್ಲಿ ವಿಭಜಿಸಬಹುದು. ಅದನ್ನು ನಾವು 'ಕೇಳುವುದು, ಹೇಳುವುದು, ಓದುವುದು ಮತ್ತು ಬರೆಯುವುದು' ಎಂಬ ನಾಲ್ಕು ಶ್ರೇಣಿಯಲ್ಲಿ ವಿಂಗಡಿಸಬಹುದು. ಒಂದು ವೇಳೆ ನಾವು ಕೇಳುವುದು, ಹೇಳುವುದನ್ನು ಜೈವಿಕ ದೈಹಿಕ ಕ್ರಿಯೆಯಾಗಿ ನೋಡದೆ, ಕೌಶಲ್ಯದ ರೂಪದಲ್ಲಿ ನೋಡುವುದಾದರೆ ಅದರಲ್ಲಿ ಕೆಲವು ಮೂಲಭೂತ ವ್ಯತ್ಯಾಸಗಳು ಇರಬೇಕಾಗುತ್ತದೆ. ಕೌಶಲ್ಯಗಳ ವ್ಯಾಪ್ತಿಯಲ್ಲಿ ನೋಡುವುದಾದರೆ ಕೇಳುವುದು, ಹೇಳುವುದರಲ್ಲಿ ತಿಳುವಳಿಕೆಯು ಅಡಕವಾಗಿದೆ. ಈ ತಿಳುವಳಿಕೆ ವ್ಯಾಪಕವಾಗುತ್ತಾ ಅರ್ಥ ನಿರ್ಮಾಣ ಮಾಡುತ್ತದೆ. ಬರೆಯುವ ಮತ್ತು ಓದುವ ಮೂಲಭೂತ ಕೌಶಲ್ಯದಲ್ಲಿ ಲಿಖಿತ ವಿಷಯವನ್ನು ಓದಿ ಅದರ ತಿರುಳನ್ನು ತಿಳಿಯುವುದು ಮತ್ತು ತಮ್ಮದೇ ಆದ ಶಬ್ದಗಳಿಂದ ಅಭಿಪ್ರಾಯಗಳನ್ನು ಬರೆಯುವುದು ಮುಂತಾದವು ಇರುತ್ತದೆ. ಕೇವಲ ಲಿಖಿತ ವಿಷಯವನ್ನು ಖಂಡ ಖಂಡವಾಗಿ ಓದಿ ಸಮಸ್ಯೆಯನ್ನು ಬಿಡಿಸುವುದು ನಿಜ ಅರ್ಥವನ್ನು ಕೊಡುವುದಿಲ್ಲ. ಈ ಎಲ್ಲವನ್ನೂ ಇನ್ನೂ ಆಳವಾಗಿ ನೋಡಿದಾಗ ಆಲೋಚನೆಗಳು ಮತ್ತು ವಿಚಾರಗಳ ಪಾತ್ರವನ್ನು ಇಲ್ಲಿಯೂ ನೋಡಬಹುದು. ಕಥೆಗಳಲ್ಲಿ ಬರೆಯುವ-ಓದುವ ಆರಂಭಿಕ ಚಟುವಟಿಕೆಗಳನ್ನು ಅಳವಡಿಸಬಹುದು ಮತ್ತು ಮೂಲ ಬರವಣಿಗೆಯ ಅವಕಾಶಗಳನ್ನು ಸಹ ತೆಗೆದುಕೊಳ್ಳಬಹುದು. ಕಥೆಗಳಿಂದ ಪದಗಳು, ಪಾತ್ರಗಳು ಹಾಗು ಪ್ರಮಾಣಗಳ ಪರಿಕಲ್ಪನೆಗಳ ಕುರಿತು ಸುಲಭವಾಗಿ ಕೆಲಸ ಮಾಡಬಹುದು. 'ಚೀ ಚೀ ಚೂಹೆ' ಕಥೆ ಹೇಳಿದ ನಂತರ ಬೇರೆ ಬೇರೆ ತರಗತಿಯ ಮಕ್ಕಳಿಗೆ ಬೇರೆ ಬೇರೆ ಕೆಲಸಗಳನ್ನು ಕೊಡಲಾಯಿತು. ಒಂದನೆಯ ಮತ್ತು ಎರಡನೆಯ ತರಗತಿಯ

ಮಕ್ಕಳಿಗೆ ಚೀ ಚೀಗೆ ತನ್ನ ಹಳ್ಳಿಯಲ್ಲಿ ಕಾಣಿಸುವ ಎಲ್ಲ ವಸ್ತುಗಳು ಪಟ್ಟಿ ಮಾಡಲು ಹೇಳಲಾಯಿತು. ಒಂದು ವೇಳೆ ಚೀ ಚೀ ನಿಮ್ಮ ಮನೆಗೆ ಬಂದರೆ ನೀವೇನು ಮಾಡುವಿರಿ? ಎನ್ನುವ ಪ್ರಶ್ನೆಗೆ ಉತ್ತರ ಬರೆಯುವಂತೆ ಮೂರರಿಂದ ಐದನೆಯ ತರಗತಿಯ ಮಕ್ಕಳಿಗೆ ಹೇಳಲಾಯಿತು.

ಕಥೆಯಲ್ಲಿ ಬಂದಿರುವ ಪದಗಳನ್ನು ಬರೆಸುವ ಮೂಲಕ ಪರಿಚಯಿಸುವುದು, ಕಥೆಯಲ್ಲಿ ಬರುವ ಪಾತ್ರಗಳ ಬಗ್ಗೆ ಮಾತನಾಡಿಸುವುದು ಮತ್ತು ನಾಟಕದ ರೂಪದಲ್ಲಿ ಕಥೆಯ ಚಿತ್ರಣ ನೀಡುವುದು ಮುಂತಾದ ಚಟುವಟಿಕೆಗಳು ನಾವು ಮಕ್ಕಳನ್ನು ಸುಲಭವಾಗಿ ಭಾಷೆಯ ಕೌಶಲ್ಯಗಳೊಂದಿಗೆ ಸಂಪರ್ಕಿಸಲು ಅವಕಾಶ ಒದಗಿಸುತ್ತವೆ. ಕಥೆಯನ್ನು ಕೇಳುವಾಗ ಮಕ್ಕಳು ಆ ಕಥೆಯನ್ನು ತಮ್ಮ ನೋಟ್ ಬುಕ್ಕಿನಲ್ಲಿ ದಾಖಲಿಸಿಕೊಳ್ಳಲು ಬಯಸುತ್ತಾರೆ. ಆದ್ದರಿಂದ ಅವರಿಗೆ ಉಕ್ತಲೇಖನದ ಮೂಲಕ ಕಥೆಯನ್ನು ಬರೆಸಬಹುದು. ಇದಲ್ಲದೆ, ಕತೆಯನ್ನು ಅರ್ಧ ಬರೆಸಿ, ಅದರ ಅಂತ್ಯದ ಬಗ್ಗೆ ಮಕ್ಕಳಿಂದಲೇ ಚರ್ಚೆ ಮಾಡಿಸಬಹುದು.

ತರಗತಿಯ ಸಮಯದಲ್ಲಿ ಹಲವಾರು ಚಿತ್ರಕಥೆಗಳನ್ನೂ ಸಹ ಉಪಯೋಗಿಸಬಹುದು. ಕಥೆಗಳ ಮೂಲಕ ಸೆಳೆಯಲು ಇನ್ನೂ ಹಲವಾರು ವಿಭಿನ್ನವಾದ ಮಾರ್ಗಗಳಿವೆ.

**೩) ಕಥೆಯಲ್ಲಿ ಶಿಕ್ಷಕರ ಮತ್ತು ಶಾಲೆಯ ಪಾತ್ರ.**

ಶಾಲೆಗಳಲ್ಲಿ ಕಥೆಯು ಸದಾ ಪ್ರಾರ್ಥನೆಯ ಒಂದು ಭಾಗವಾಗಿದ್ದು, ಅದರ ಮುಖ್ಯ ಉದ್ದೇಶ ಮಕ್ಕಳಲ್ಲಿ ಮೌಲ್ಯವನ್ನು ಕಲಿಸುವುದಾಗಿರಬಹುದು. ಈ ಮೌಲ್ಯಗಳನ್ನು ಮಕ್ಕಳು ಎಷ್ಟರ ಮಟ್ಟಿಗೆ ಕಲಿಯಬಹುದು ಅಥವಾ ಅವರಿಗೆ ಈ ರೀತಿಯಿಂದ ಮೌಲ್ಯವನ್ನು ಕಲಿಸಬಹುದೇ ಎನ್ನುವ ಪ್ರಶ್ನೆಯನ್ನು ಚರ್ಚಿಸಬಹುದು. ಆದರೆ ಒಂದು ವೇಳೆ ನಾವು ಭಾಷಾ ಕೌಶಲ್ಯಗಳ ಬೆಳವಣಿಗೆಯ ದೃಷ್ಟಿಯಿಂದ ನೋಡಿದರೆ ಕಥೆಗಳು ಅಪರೂಪವಾಗಿ ತರಗತಿಯ ಪ್ರಕ್ರಿಯೆಗಳ ಭಾಗವಾಗಿರುತ್ತದೆ. ಶಿಕ್ಷಕರ ಅವಲಂಬನೆ ಕೂಡ ಹೆಚ್ಚಾಗಿ ಪಠ್ಯಪುಸ್ತಕದಲ್ಲಿನ ಕಥೆಗಳಿಗೆ ಸೀಮಿತವಾಗಿರುತ್ತದೆ. ಭಾವಗಳ ಯಾತ್ರೆಯಂತೆ ಇರಬೇಕಾದ ಕಥೆಗಳು ಕೇವಲ ಪಠ್ಯ ಚಟುವಟಿಕೆಗಳನ್ನು ಪೂರ್ಣಗೊಳಿಸುವ ಮಾಧ್ಯಮವಾಗಿ ಬಿಡುತ್ತದೆ.

ಕಥೆಯನ್ನು ಒಂದು ಬೋಧನಾ ವಿಧಾನವಾಗಿ ನೋಡಲು, ಶಿಕ್ಷಕರು ತಮ್ಮದೇ ಮಟ್ಟದಲ್ಲಿ ತಯಾರಿ ಮಾಡುವುದು ಒಳ್ಳೆಯದು. ಕಥೆಯನ್ನು ಆಸಕ್ತಿದಾಯವಾಗಿಸಲು ಗೊಂಬೆಗಳನ್ನು ಸಹ ಉಪಯೋಗಿಸಬಹುದು. ಮಕ್ಕಳಿಂದ ಕಥೆಗಳ ಚಾರ್ಟ್ ಕೂಡ ಮಾಡಿಸಬಹುದು. ಮಕ್ಕಳೇ ಸ್ವತಃ ಕಥೆ ರಚಿಸುವಂತೆ ಪ್ರೇರೇಪಿಸಬಹುದು. ತರಗತಿಗಳಲ್ಲಿ ಕಥೆಗಳಿಗೆ ಒಂದು ಸ್ಥಾನ ಕೊಡುವುದಕ್ಕಾಗಿ ಶಿಕ್ಷಕರು ಉದಾರ ದೃಷ್ಟಿಕೋನವನ್ನು ಬಳಸಬಹುದು.

ಶಿಕ್ಷಣದ ಒಂದು ವಿಧಾನವಾಗಿ ಕಥೆಯನ್ನು ಪ್ರಯೋಗಿಸಬೇಕಾದರೆ ಶಿಕ್ಷಕನು ಸ್ವತಃ ತನ್ನ ಸಿದ್ಧತೆ ಮಾಡಿಕೊಳ್ಳುವುದು ಅಷ್ಟೇ ಅವಶ್ಯಕವಾಗಿದೆ. ಒಂದು ಕಥೆಯನ್ನು ಹೇಳಿ, ಅದರ ಪ್ರಶ್ನೋತ್ತರ ಮಾಡಿಸಿ, ನೆನಪಿಟ್ಟುಕೊಳ್ಳುವಂತೆ ಮಾಡುವುದು, ಮಕ್ಕಳಿಗೆ ಕಥೆಯ ಬಗ್ಗೆ ನಿರ್ಣಯ ತೆಗೆದುಕೊಳ್ಳುವಷ್ಟು ಆಲೋಚನೆಗಳಿಗೆ ಅವಕಾಶ ನೀಡದೆ, ಕಲ್ಪನೆ ಮಾಡಿಕೊಳ್ಳಲು ಅಥವಾ ಊಹೆ ಮಾಡಿಕೊಳ್ಳುವ ಕೆಲಸವನ್ನು ಕೊಡಬಹುದು. ಕಥೆಯ ಸಾಹಿತ್ಯವನ್ನು ಶಿಕ್ಷಕನು ಸ್ವತಃ ಓದುತ್ತಿರುವ ಹಾಗೆ ಯಾವ ರೀತಿ ಹೇಳುತ್ತಾನೋ ಹಾಗೆ ಹೇಳುವುದು ಅನಿವಾರ್ಯವಲ್ಲ. ಸೋನಾ ಮೌಸಿಯ ಕಥೆಯನ್ನು ಮಕ್ಕಳಿಗೆ ಹೇಳುತ್ತಾ, ಎಲ್ಲ ಪ್ರಾಣಿಗಳು ಸೋನಾಳಿಗೆ ಸಹಾಯ ಮಾಡಬೇಕೇ ಅಥವಾ

ಮಾಡಬಾರದೇ ಎನ್ನುವ ನಿರ್ಣಯ ತೆಗೆದುಕೊಳ್ಳಲು ಮಕ್ಕಳಿಗೆ ಅವಕಾಶ ನೀಡಲಾಯಿತು. ಮಕ್ಕಳ ಮೊದಲ ಉತ್ತರವೇ, 'ಸಹಾಯ ಮಾಡಬೇಕು, ಏಕೆಂದರೆ ಆಕೆ ತೊಂದರೆಯಲ್ಲಿ ಸಿಲುಕಿದ್ದಾಳೆ" ಎಂದಾಗಿತ್ತು. ಅನಂತರ ಮಕ್ಕಳಿಗೆ, 'ಒಂದು ವೇಳೆ ಯಾರಾದರೂ ನಿಮಗೆ ಸಹಾಯ ಮಾಡದಿದ್ದರೆ, ನೀವು ಅವರ ಸಹಾಯ ಮಾಡುವಿರಾ?' ಎನ್ನುವ ಪ್ರಶ್ನೆ ಕೇಳಿದಾಗ ಅವರ ಉತ್ತರ 'ಇಲ್ಲ' ಎಂದಾಗಿತ್ತು. 'ಹಾಗಾದರೆ ಉಳಿದೆಲ್ಲ ಪ್ರಾಣಿಗಳು ಸೋನಾಳಿಗೇಕೆ ಸಹಾಯ ಮಾಡಬೇಕು?' ಆಗ ಮಕ್ಕಳು ಸ್ವಲ್ಪ ಹೊತ್ತು ಯೋಚನೆ ಮಾಡಿದರು ಮತ್ತು 'ಯಾರಾದರೂ ತುಂಬಾ ತೊಂದರೆಯಲ್ಲಿದ್ದಾಗ ನಾವು ಅವರಿಗೆ ಸಹಾಯ ಮಾಡುತ್ತೇವೆ' ಎನ್ನುವ ಉತ್ತರಿಸಿದರು. ಒಂದು ವೇಳೆ ಎಲ್ಲ ಪ್ರಾಣಿಗಳು ಸೋನಾ ಮೌಸಿಯನ್ನು ಉಳಿಸದಿದ್ದರೆ ಆಕೆ ಸತ್ತು ಹೋಗುತ್ತಿದ್ದಳೇನೊ ಮತ್ತು ಇದಾದ ನಂತರ ಆಕೆಯ ಮನಸ್ಸು ಪರಿವರ್ತನೆಯಾಗಲೂಬಹುದು ಮತ್ತು ಆಕೆ ಎಲ್ಲರಿಗೂ ಸಹಾಯ ಮಾಡಲು ಆರಂಭಿಸಬಹುದು. ಈ ಕಥೆಯನ್ನು ಹೀಗೆ ಮುಗಿಸಲಾಯಿತು. ಈ ಕಥೆಯ ಮುಕ್ತಾಯ ಹೇಗಿರಬೇಕು ಅನ್ನುವುದನ್ನು ಮಕ್ಕಳೇ ಸ್ವತಃ ನಿರ್ಣಯಿಸಿದರು. ಇವೆಲ್ಲವೂ ಅವರ ಸ್ವಾನುಭವಕ್ಕೆ ಹತ್ತಿರವೆಂದೂ ಮತ್ತು ಸಹಜವೆಂದೂ ಹೇಳಬಹುದು. ಇದೇ ರೀತಿ ಕೆಲವು ಸಣ್ಣಪುಟ್ಟ ಚಟುವಟಿಕೆಗಳು ಅಥವಾ ಪ್ರಶ್ನೆಯನ್ನು ಕಥೆಗಳಲ್ಲಿ ಅಳವಡಿಸಬಹುದು. ಶಿಕ್ಷಕರು ಒಂದು ವೇಳೆ ಮಕ್ಕಳಿಗೆ ಯೋಚಿಸುವ ಮತ್ತು ತರ್ಕಿಸುವ ಸ್ವಾತಂತ್ರ್ಯವನ್ನು ಕೊಟ್ಟರೆ ಮಕ್ಕಳನ್ನು ಚಿಂತನಶೀಲ ಹಾಗು ಸಂವೇದನಾಶೀಲ ಮನುಷ್ಯರನ್ನಾಗಿ ರೂಪಿಸಬಹುದು.

ಸಿದ್ಧತೆಯಲ್ಲಿ ಮೊದಲನೆಯ ಹೆಜ್ಜೆ ಕಥೆಗಳ ಸಂಗ್ರಹ ಮಾಡುವುದು, ಎರಡನೆಯ ಹೆಜ್ಜೆ ಕಥೆಯ ಆಚೆ ಕೆಲವು ಕಾರ್ಯ ಚಟುವಟಿಕೆಗಳನ್ನು ರೂಪಿಸುವುದು. ಕಥೆಗಳನ್ನು ಆಸಕ್ತಿದಾಯಕವಾಗಿ ಪ್ರಸ್ತುತಪಡಿಸುವುದು ಮತ್ತು ಕಥೆಗಳ ಮುಖಾಂತರ ಸಂವಾದಕ್ಕೆ ಅವಕಾಶಗಳನ್ನು ಹುಡುಕುವುದು ಇವೆಲ್ಲವನ್ನೂ ಮಾಡುವ ಮೂಲಕ ಮಕ್ಕಳು ಸೃಜನಶೀಲತೆಯಿಂದ ಆಲೋಚನೆ ಮಾಡಲು ಪ್ರೇರೇಪಿಸಬಹುದು. ಈ ಪ್ರಕ್ರಿಯೆಯನ್ನು ಮುಂದುವರಿಸುತ್ತಾ ಮಕ್ಕಳು ಸ್ವತಃ ತಾವೇ ಕಥೆ ಅಥವಾ ಕವಿತೆ ಬರೆಯಲು ಅವಕಾಶ ನೀಡಬಹುದು. ಮಕ್ಕಳ ಬರವಣಿಗೆಯನ್ನು ಪರಿಶೀಲಿಸುವ ಸಂದರ್ಭದಲ್ಲಿ ಶಿಕ್ಷಕರು, ಸಾಧಾರಣವಾಗಿ ಸೃಜನಶೀಲತೆಗಿಂತ ಹೆಚ್ಚು ವ್ಯಾಕರಣ, ಕಾಗುಣಿತ ದೋಷಗಳ ಬಗ್ಗೆ ಒತ್ತು ಕೊಡುತ್ತಾರೆ. ಆದರೆ ಮಕ್ಕಳ ಸಹಜವಾದ ತಪ್ಪುಗಳಿಗೆ ಅವರು ಯಾವುದೇ ಜಾಗ ನೀಡುವುದಿಲ್ಲ. ಜೀನ್ ಪ್ಯಾಜೆಯ ಅರಿವಿನ ವಿಕಾಸ ಪ್ರಕ್ರಿಯೆಯ ಸಿದ್ಧಾಂತದ ಪ್ರಕಾರ, ಮಕ್ಕಳು ತಮ್ಮ ಮೆದುಳಿನಲ್ಲಿ ವಿಭಿನ್ನ ರೀತಿಯ ಶ್ರೇಣಿಗಳನ್ನು ನಿರ್ಮಿಸಿಕೊಳ್ಳುವ ಮೂಲಕ ಹೊಸ ಜ್ಞಾನವನ್ನು ಸೃಷ್ಟಿಸಿಕೊಳ್ಳುತ್ತಾರೆ. ವಯಸ್ಕರು ಮಕ್ಕಳಿಗೆ ಸ್ಕ್ಯಾಫೋಲ್ಡಿಂಗ್ ಮುಖಾಂತರ ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆಯಲ್ಲಿ ಅವಶ್ಯಕವಾದ ಬೆಂಬಲ ನೀಡುತ್ತಲೇ ಅವರ ಜ್ಞಾನ ವಿಸ್ತಾರವಾಗುವಂತೆ ನೋಡಿಕೊಳ್ಳುತ್ತಾರೆ.

ಶಾಲೆಗಳಲ್ಲಿ ಮಕ್ಕಳಿಗೆ ಕಥೆಗಳ ಮೂಲಕ ಓದಲು-ಬರೆಯಲು ಅವಕಾಶ ಮಾಡಿಕೊಡಬಹುದಾಗಿದೆ. ಬೇರೆ ಬೇರೆ ತರಹದ ಕಥೆಗಳಿಗೆ ಮಕ್ಕಳ ಗ್ರಂಥಾಲಯದ ಬಳಕೆಯು ಪರಿಣಾಮಕಾರಿಯಾದ ವಿಧಾನವಾಗಬಹುದು. ಇಂತಹ ಮಕ್ಕಳ ಗ್ರಂಥಾಲಯಗಳನ್ನು ಶಾಲೆಯ ಮಟ್ಟದಲ್ಲೇ ನಡೆಸಬಹುದಾಗಿದ್ದು, ಇದರ ಜವಾಬ್ದಾರಿಯನ್ನು ಮಕ್ಕಳಿಗೆ ವಹಿಸಬಹುದಾಗಿದೆ. ಶಾಲೆ ಒಂದು ಸಂಸ್ಥೆಯ ರೂಪದಲ್ಲಿ ಕಥೆಗಳ ಮೂಲಕ ಮಕ್ಕಳಲ್ಲಿ ಬರೆಯುವ-ಓದುವ ಕೌಶಲ್ಯವನ್ನು ಬೆಳಸಬಹುದಾಗಿದೆ. ಕಥೆಗಳು ಕೇವಲ ಮೌಲ್ಯಾಧರಿತ ಅಥವಾ ಮನೋರಂಜನೆಯ ಭಾಗವಾಗಿರದೇ ಕಲಿಸುವ ಪ್ರಕ್ರಿಯೆಯ ಒಂದು ಭಾಗವೂ ಆಗಬಹುದಾಗಿದೆ.